# ಶಿಕ್ಷಣ ಮತ್ತು ಉದ್ಯೋಗ : ಅಂಚಿನ ನೋಟ

ವಿಕಾಸ್ ಮನಿಯಾರ್

ನಾನು ಇತ್ತೀಚೆಗೆ ರತ್ವ ಎಂಬ ಗುಜರಾತಿನ ಒಂದು ಆದಿವಾಸಿ ಸಮುದಾಯದವರೇ ಹೆಚ್ಚು ವಾಸಿಸುತ್ತಿರುವ ಹಳ್ಳಿಯಲ್ಲಿ ಸ್ವಲ್ಪಕಾಲ ಕಳೆದೆ. ಅವರ ಜೊತೆ ಮಾತುಕತೆ ನಡೆಸಿದಾಗ ಅವರು ತಮ್ಮ ಮಕ್ಕಳನ್ನು ಶಾಲೆಗೆ ಕಳುಹಿಸಲು ಮುಖ್ಯ ಕಾರಣವೆಂದರೆ 'ಧಂಧೋ'(ಇದು ಗುಜರಾತಿ ಭಾಷೆಯ ಒಂದು ಪದ. ಇದನ್ನು ಉದ್ಯೋಗ ಎಂದು ಅನುವಾದಿಸಬಹುದು) ಎಂದು ಹೇಳಿದರು. 'ಧಂಧೋ' ಎಂದರೆ (ಸರ್ಕಾರಿ ಅಥವಾ ಖಾಸಗಿ ನೌಕರಿ) ಕೆಲಸಗಳು ಅಥವಾ ಸಣ್ಣ ವ್ಯವಹಾರಗಳ ಸ್ವಂತ ಉದ್ಯೋಗ ಎನ್ನಬಹುದು. ನಾನು ಅವರ ಜೊತೆ ಇನ್ನೂ ಆಳವಾಗಿ ಮಾತನಾಡಿದಾಗ ಅವರು ಸರ್ಕಾರಿ ಉದ್ಯೋಗ ಅದರಲ್ಲೂ ನಿಶ್ಚಿತವಾಗಿ ಆರಂಭಿಕ ಹಂತದ ಸರ್ಕಾರಿ ನೌಕರಿಗೆ ಹೆಚ್ಚಿನ ಆದ್ಯತೆ ನೀಡುತ್ತಿರುವುದು ನಿಚ್ಚಳವಾಗಿ ಕಂಡುಬಂತು. ಅಂದರೆ ಇವು ಸಾಮಾನ್ಯವಾಗಿ ಶಿಕ್ಷಕರು, ನರ್ಸುಗಳು, ಪೊಲೀಸ್ ಕಾನ್ಸ್ಟೇಬಲ್‌ಗಳು ಅಥವಾ ಸೇನಾ ಜವಾನ್ ಕೆಲಸಗಳು, (ಆಡಳಿತಾತ್ಮಕ ವರ್ಗೀಕರಣದಲ್ಲಿ ಇವು ಸಿ ಅಥವಾ ಡಿ ಗುಂಪಿನ ಉದ್ಯೋಗಗಳು). ಸಾಪೇಕ್ಷವಾಗಿ ಇವು ಹೆಚ್ಚಿನ ಸಂಖ್ಯೆಯಲ್ಲಿ ಲಭ್ಯವಿರುತ್ತವೆ. ನಮ್ಮ ಶಿಕ್ಷಣವು ವಿದ್ಯಾರ್ಥಿಗಳನ್ನು ಕೈಗಾರಿಕೆಗಳ ಕೆಲಸಕ್ಕೆ ಅರ್ಹರನ್ನಾಗಿ ಸಿದ್ಧಪಡಿಸಬೇಕೆನ್ನುವ ದೃಷ್ಟಿಕೋನಕ್ಕೆ ಶಿಕ್ಷಣ ನೀತಿ ದಸ್ತಾವೇಜು ಒತ್ತು ನೀಡುತ್ತದೆ. ಹೊಸ ಶಿಕ್ಷಣ ನೀತಿಯ ಸಮಾಲೋಚನೆಗಾಗಿ, ಎಂಎಚ್‌ಆರ್ಡಿ (ಮಾನವ ಸಂಪನ್ಮೂಲ ಅಭಿವೃದ್ಧಿ ಸಚಿವಾಲಯ) ವೆಬ್‌ಸೈಟ್‌ನಲ್ಲಿರುವ ಒಂದು ಕರಡು ದಾಖಲೆಯು (1) ಹೀಗೆ ಹೇಳುತ್ತದೆ: "ಶಿಕ್ಷಣ ವ್ಯವಸ್ಥೆಯ ಉತ್ಪನ್ನಗಳ (ವಿದ್ಯಾರ್ಥಿಗಳ) ಉದ್ಯೋಗಾರ್ಹತೆಯನ್ನು ಹೆಚ್ಚಿಸುವ ಕಾರ್ಯಕ್ಕೆ ಹೆಚ್ಚಿನ ಪ್ರಾತಿನಿಧ್ಯ ನೀಡಬೇಕು." ಇದಕ್ಕೆ ಶಿಕ್ಷಣ ತಜ್ಞರ ಬೆಂಬಲವೂ ಕೂಡ ಇದೆ.

ವ್ಯಕ್ತಿಗತ ಮಟ್ಟದಲ್ಲಿ ಶಿಕ್ಷಣವು ಸ್ವತಃ ಒಂದು ಹೂಡಿಕೆಯಾಗಿದ್ದು, ಭವಿಷ್ಯದಲ್ಲಿ ಹೆಚ್ಚಿನ ಸಂಪಾದನೆಯ ರೂಪದಲ್ಲಿ ಗಳಿಕೆಗೆ ಎಡೆಮಾಡಿಕೊಡುತ್ತದೆ ಎನ್ನುವುದು ಮಾನವ ಬಂಡವಾಳ ಸಿದ್ಧಾಂತದ (Human Capital Theory) ಪ್ರತಿಪಾದನೆಯಾಗಿದೆ. ಹಾಗೆಯೇ ರಾಷ್ಟ್ರೀಯ ಮಟ್ಟದಲ್ಲಿ ಶಿಕ್ಷಣ ಕ್ಷೇತ್ರದಲ್ಲಿ ಹೆಚ್ಚಿನ ಹೂಡಿಕೆಯು ಭವಿಷ್ಯದಲ್ಲಿ ಹೆಚ್ಚಿನ ಜಿಡಿಪಿಯ ಬೆಳವಣಿಗೆಯನ್ನು (GDP growth) ನಿರೀಕ್ಷಿಸುತ್ತದೆ. ಹೀಗಾಗಿ ಶಿಕ್ಷಣವು ಉದ್ಯೋಗಕ್ಕೆ ಒಂದು ಕೊಂಡಿ ಎನ್ನುವುದು ಜನಪ್ರಿಯ ಕಲ್ಪನೆಯಾಗಿ ಬಲವಾಗಿ ಬೆಳೆದುಬಿಟ್ಟಿದೆ. ಆದರೆ, ವಾಸ್ತವದ ನೆಲೆಯು ನನಗೆ ಬೇರೆಯದೇ ಕತೆಯನ್ನು ಹೇಳಿತು. ಗುಜರಾತಿನ ಛೋಟಾ ಉದೇಪುರ್ ಎಂಬ ಜಿಲ್ಲೆಯ ಭಿಲ್ಪುರ್ (ಹೆಸರನ್ನು ಬದಲಾಯಿಸಲಾಗಿದೆ) ಹಳ್ಳಿಯಲ್ಲಿರುವ ಒಟ್ಟು ಜನರ ಸಂಖ್ಯೆ ೩ ಸಾವಿರ. ಬೇಸಾಯವು ಈ ಹಳ್ಳಿಯ ಮುಖ್ಯ ಆರ್ಥಿಕ ಚಟುವಟಿಕೆ. ಈ ಜೀವನಾಧಾರ ಬೇಸಾಯದೊಂದಿಗೆ ಇಲ್ಲಿನ ಜನರು ಜೈಪುರ್, ವಾಪಿ ಇತ್ಯಾದಿ ಪಶ್ಚಿಮ ಭಾರತದ ಪ್ರಮುಖ ನಗರಗಳ ಕಟ್ಟಡ ನಿರ್ಮಾಣ ಸ್ಥಳಗಳಲ್ಲಿ ವಲಸೆ ಕಾರ್ಮಿಕರಾಗಿ ಹೋಗುತ್ತಾರೆ. ಇಲ್ಲಿನ ಕೆಲವು ಕುಟುಂಬಗಳು ಗುಜರಾತಿನ ರಾಜ್‌ಕೋಟ್‌ನ ಸುತ್ತಮುತ್ತಲಿರುವ ಹತ್ತಿಹೊಲಗಳಲ್ಲಿ ವಲಸೆ ಗೇಣಿ ರೈತರಾಗಿ ಕೆಲಸ ಮಾಡುವ ಅಭ್ಯಾಸವೂ ಇದೆ.

ಪ್ರಾದೇಶಿಕವಾಗಿ ಇಲ್ಲಿನ ಗ್ರಾಮಗಳನ್ನು ಫಾಲಿಯಸ್'ಗಳಾಗಿ (*falias*) ಸಂಘಟಿಸಲಾಗಿದೆ, ಇವು ಸಾಮಾನ್ಯ ವಂಶಪಾರಂಪರ್ಯವಾಗಿ ಬಂದ ಭೂಮಿಯಾಗಿದೆ. ಪ್ರತಿಯೊಂದು ಕುಟುಂಬವು ಸರಾಸರಿ ಒಂದರಿಂದ ಎರಡು ಎಕರೆ ಜಮೀನನ್ನು ಹೊಂದಿದ್ದು ಈ ಜಮೀನುಗಳು ಪುರುಷ ವಾರಸುದಾರರಿಗೆ ವರ್ಗಾಯಿಸಲ್ಪಡುತ್ತಾ ಪ್ರತಿ ಪೀಳಿಗೆಯು ಹೊಂದುವ ಜಮೀನು ಕಾಲ ಕ್ರಮೇಣ ಕಡಿಮೆಯಾಗುತ್ತಿದೆ. ಪ್ರಮುಖವಾಗಿ ಇಲ್ಲಿನ ಜಮೀನುಗಳಲ್ಲಿ ಸ್ವಂತ ಬಳಕೆಗೆ ಮಾತ್ರ ಬೇಕಾಗುವ ಬೆಳೆಗಳನ್ನು ಬೆಳೆಯಲಾಗುತ್ತದೆ ಮತ್ತು ಇದು ನಗದು ಆದಾಯದ ಸಣ್ಣ ಭಾಗ ಮಾತ್ರ. ಬೇರೆಬೇರೆ ನಿರ್ಮಾಣ

ಸ್ಥಳಗಳಿಗೆ ವಲಸೆ ಹೋಗಿ ಕೆಲಸ ಮಾಡುವುದರಿಂದ ಬರುವ ಆದಾಯದಿಂದ ಇಲ್ಲಿನ ಜನರು ತಮಗೆ ಬೇಕಾದ ಮಿಕ್ಕ ಅಗತ್ಯಗಳನ್ನು ಪೂರೈಸಿಕೊಳ್ಳುತ್ತಾರೆ. ಇಲ್ಲಿನ ಬಹುತೇಕ ಯುವಕರು (15-40 ವರ್ಷದವರು) ಪ್ರತಿ ವರ್ಷವೂ ಇಂತಹ ಸ್ಥಳಗಳಿಗೆ ಕೆಲವು ತಿಂಗಳ ಕಾಲ ವಲಸೆ ಹೋಗುತ್ತಾರೆ.

ಇಲ್ಲಿನ ಬಹಳಷ್ಟು ಕುಟುಂಬಗಳು ತಮ್ಮ ಮಕ್ಕಳಿಗೆ ಒಂದು ಉದ್ಯೋಗ, ಅದರಲ್ಲೂ ಸರ್ಕಾರಿ ಕೆಲಸ ಸಿಗಬೇಕೆಂದು ಬಯಸುತ್ತಾರೆ. ಈ ಮೂಲಕ ಬಡತನ ಹಾಗೂ ಜೀವನಾಧಾರವಾದ ಬೇಸಾಯದ ಮೇಲೆ ಬದುಕನ್ನು ಅವಲಂಬಿಸಬೇಕಾದ ಅನಿಶ್ಚಿತತೆಯಿಂದ ಹೊರಬರಬಹುದೆಂದು ಭಾವಿಸುತ್ತಾರೆ. ಆದರೂ, ಇಲ್ಲಿನ ಶೇಕಡ 5ಕ್ಕಿಂತ ಕಡಿಮೆ ಕುಟುಂಬಗಳಿಗೆ ಮಾತ್ರ ಸರ್ಕಾರಿ ಅಥವಾ ಖಾಸಗಿ ವಲಯದ ಸಂಬಳದ ಕೆಲಸವು ಸಿಕ್ಕಿದೆ. ಮುಂದೆ ಚರ್ಚಿಸುವಂತೆ ಇವರಿಗೆ ಸಂಬಳದ ಉದ್ಯೋಗ ಸಿಗುವ ಅವಕಾಶಗಳು ಬಹಳ ಕಡಿಮೆ.

ಈ ಹಳ್ಳಿಯಲ್ಲಿ ನಾಲ್ಕು ಶಾಲೆಗಳಿವೆ: ಒಂದು ಕಿರಿಯ ಪ್ರಾಥಮಿಕ ಶಾಲೆ ( 1ರಿಂದ 5ನೇ ತರಗತಿ); ಒಂದು ಹಿರಿಯ ಪ್ರಾಥಮಿಕ ಶಾಲೆ (1ರಿಂದ 8ನೇ ತರಗತಿ); ಒಂದು ವಸತಿ ಆಶ್ರಮ ಶಾಲೆ (1ರಿಂದ 8ನೇ ತರಗತಿ); ಹೊಸದಾಗಿ ತೆರೆದ ಒಂದು ಮಾದರಿ ಶಾಲೆ (6ರಿಂದ12ನೇ ತರಗತಿ). ಸೆಕೆಂಡರಿ ಶಾಲೆಯಲ್ಲಿ ಓದುವ ಇಲ್ಲಿನ ಬಹಳಷ್ಟು ವಿದ್ಯಾರ್ಥಿಗಳು ಚೋಟಾ ಉದೆಪುರ್ನ ಸೆಕೆಂಡರಿ ಶಾಲೆಗಳಿಗೆ ಪ್ರಯಾಣ ಮಾಡುತ್ತಾರೆ. ಕಳೆದ ವರ್ಷ, ಚೋಟಾ ಉದೆಪುರ್ ತಾಲೂಕಿನಲ್ಲಿ (ಬ್ಲಾಕ್) ಮಾಧ್ಯಮಿಕ ಶಾಲೆಯಲ್ಲಿ ನೋಂದಣಿಯಾಗಿದ್ದವರಲ್ಲಿ ಸುಮಾರು ಶೇಕಡ 50ರಷ್ಟು ಮಕ್ಕಳು ಪಾಸಾದರು. ಇದರಲ್ಲಿ ಹೈಯರ್ ಸೆಕೆಂಡರಿ ಸೇರಿದವರು ಶೇ. 33ರಷ್ಟು ಮಕ್ಕಳು ಮಾತ್ರ. ಶಾಲೆಗೆ ಸೇರಿದವರಲ್ಲಿ ಶೇಕಡ 17ರಷ್ಟು ವಿದ್ಯಾರ್ಥಿಗಳು ಮಾತ್ರ ಓದನ್ನು ಮುಗಿಸಿದರು. ಬಹಳಷ್ಟು ವಿದ್ಯಾರ್ಥಿಗಳು ಸೆಕೆಂಡರಿ ಶಿಕ್ಷಣವನ್ನೂ ಮುಗಿಸಲಾಗದಿರುವುದನ್ನು ಗಮನಿಸಿದರೆ ಈ ಪ್ರದೇಶದಲ್ಲಿ ಸೆಕೆಂಡರಿ ಶಾಲೆ ಮುಗಿಸುವವವರು ಶೇಕಡ ಹತ್ತಕ್ಕಿಂತ ಕಡಿಮೆ ಎನ್ನಬಹುದು. ಉನ್ನತ ಶಿಕ್ಷಣವನ್ನು ಮಾಡುವವರ ಸಂಖ್ಯೆ ಇನ್ನೂ ಕಡಿಮೆಯೇ. ಅಂದರೆ ಈಗ ಬಹುತೇಕ ಎಲ್ಲ ಸರ್ಕಾರಿ ಹಾಗೂ ಖಾಸಗಿ ವಲಯ ಕೆಲಸಗಳಿಗೆ ಹತ್ತನೆಯ ತರಗತಿ ಮತ್ತು ಪಿಯುಸಿ ಕನಿಷ್ಠ ವಿದ್ಯಾರ್ಹತೆಯಾಗಿರುವಾಗ, ಇಲ್ಲಿನ ಬಹಳಷ್ಟು ಯುವಕರು ಉದ್ಯೋಗ ಮಾರುಕಟ್ಟೆಯಿಂದ ಹೊರಗುಳಿಯುವುದು ಖಚಿತ.

ಇಲ್ಲಿನ ಉದ್ಯೋಗ ಲಭ್ಯತೆಯ ಬಗ್ಗೆ ನೋಡಿದಾಗ ಪರಿಸ್ಥಿತಿ ಬಹಳ ಚಿಂತಾಜನಕವಾಗಿದೆ. ಈ ಪ್ರದೇಶದ ಸುತ್ತಮುತ್ತಲು ಕೆಲಸ ಒದಗಿಸುವ ಕೈಗಾರಿಕೆಗಳಾಗಲೀ ಅಥವಾ ಇತರೆ ಉದ್ಯೋಗಗಳು ಸಾಕಷ್ಟಿಲ್ಲ. ಸ್ಥಳೀಯವಾಗಿ ಸಿಗುವ ಕೆಲವೇ ಉದ್ಯೋಗಗಳೆಂದರೆ ಡೋಲೊಮೈಟ್ ಕಲ್ಲು ಕುಟ್ಟುವ ಕೆಲಸ ಅಥವಾ ಮರಳು ಗಣಿಗಾರಿಕೆ. ಇವುಗಳನ್ನು ನಂಬಿ ಬದುಕುವ ಹಾಗಿಲ್ಲ , ಹಾಗೆಯೇ ಇಲ್ಲಿನ ಸಂಬಳವೂ ಬಹಳ ಕಡಿಮೆ. ಈ ಸಮುದಾಯವು ಪರಿಶಿಷ್ಟ ಬುಡಕಟ್ಟಿಗೆ ಸೇರುವುದರಿಂದ ಮೀಸಲಾತಿಗೆ ಅರ್ಹವಾಗಿದ್ದರೂ, ಎಲ್ಲರೂ ಹೆಚ್ಚಾಗಿ ಬಯಸುವ ಸರ್ಕಾರಿ ಉದ್ಯೋಗದ ಅವಕಾಶಗಳು ಸಿಗುವುದು ತೀರಾ ಕಡಿಮೆ. ಹೀಗಾಗಿ ಇವರು ಪರಿಸ್ಥಿತಿಯು ಪ್ರತಿಕೂಲವಾಗಿದ್ದರೂ ಅನೌಪಚಾರಿಕ ವಲಯದ ಉದ್ಯೋಗಗಳಿಗೆ ಮೊರೆಹೋಗುತ್ತಾರೆ.

ಸರ್ಕಾರಿ ಅಥವಾ ಖಾಸಗಿ ವಲಯವಾಗಲಿ, ಅಥವಾ ಬಹಳ ಕಡಿಮೆಯಿರುವ ಔಪಚಾರಿಕ ವಲಯದ ಉದ್ಯೋಗಗಳಾಗಲೀ ಹೆಚ್ಚಿನ ಅವಕಾಶ ಕಲ್ಪಿಸಿಕೊಡುವುದಿಲ್ಲವಾದುದರಿಂದ ಶ್ರಮಪ್ರಧಾನ ನಿರ್ಮಾಣ ಕೆಲಸಕ್ಕಾಗಿ ನಗರಗಳಿಗೆ ವಲಸೆಹೋಗುವುದು ಇಲ್ಲಿರುವವರಿಗೆ ಬಹಳ ಸಂಭವನೀಯ ಆಯ್ಕೆಯಾಗಿದೆ.ಹಳ್ಳಿಗಳಲ್ಲಿ ಕೌಶಲ್ಯ ಆಧಾರಿತವಾದ ಸ್ವ

ಉದ್ಯೋಗದ ಅವಕಾಶಗಳನ್ನು ಗುರುತಿಸಿರುವುದು ಬಹಳ ಕಡಿಮೆಯೇ. ಇದಲ್ಲದೆ ಇವು ಜೀವನೋಪಾಯದ ಪ್ರಮುಖ ಮೂಲವಾಗುವ ಸಾಧ್ಯತೆಯೂ ಇಲ್ಲ. ಹೆಚ್ಚೆಂದರೆ ಈ ಹಳ್ಳಿಯು ಕೆಲವೇ ಎಲೆಕ್ಟ್ರಿಷಿಯನ್‌ಗಳಿಗೆ ಮತ್ತು ಪ್ಲಂಬರುಗಳಿಗೆ ಉದ್ಯೋಗ ಅವಕಾಶ ಕಲ್ಪಿಸಬಹುದು. ಆದರೆ ಉದ್ಯೋಗವನ್ನು ಅರಸುವ ಯುವಕರ ಸಂಖ್ಯೆ ಬಹಳ ಹೆಚ್ಚು. ಇನ್ನು ಸಣ್ಣ ವ್ಯವಹಾರವನ್ನು ಆರಂಭಿಸಬೇಕೆಂದರೆ ಬಂಡವಾಳ ಬೇಕಾಗುತ್ತದೆ. ಪ್ರತಿದಿನ ಬದುಕುಳಿಯುವ ಸೆಣಸಾಟದಲ್ಲಿರುವ ಇಲ್ಲಿನ ಬಹುತೇಕ ಕುಟುಂಬಗಳಿಗೆ ಇವರಿಗೆ ಇದು ದೂರದ ಮಾತು.

ಈ ಮಧ್ಯೆ, ಇಂದಿನ ವಿದ್ಯಾವಂತ ಯುವಕರು ತಮ್ಮ ಕುಟುಂಬಗಳನ್ನು ಶ್ರಮಮಾರುಕಟ್ಟೆಯ ಅನಿಶ್ಚಿತತೆಯಿಂದ ಕಾಪಾಡಿರುವ ಸಾಂಪ್ರದಾಯಿಕ ಜೀವನಾಧಾರ ಕೃಷಿಯಿಂದ ದೂರ ಸರಿಯುತ್ತಿದ್ದಾರೆ.

ಈ ಪರಿಸ್ಥಿತಿಗೆ ಶಿಕ್ಷಣವನ್ನು ಗಂಭೀರವಾಗಿ ಪರಿಗಣಿಸಿಲ್ಲ ಎಂಬುದಾಗಿ ಯುವಕರು ಅಥವಾ ಅವರ ಕುಟುಂಬಗಳನ್ನು ದೂಷಿಸುವ, ಇಲ್ಲದಿದ್ದರೆ, ಶಿಕ್ಷಣವು 'ಗುಣಮಟ್ಟ'ದ ಕಲಿಕೆಯನ್ನು ಒದಗಿಸುತ್ತಿಲ್ಲ ಎಂದು ಶಿಕ್ಷಣ ವ್ಯವಸ್ಥೆಯನ್ನು ಆರೋಪಿಸುವ ಸಾಮಾನ್ಯ ಪ್ರತಿಕ್ರಿಯೆಯನ್ನು ನಾವು ಕಾಣುತ್ತೇವೆ.ಈ ಪರಿಸ್ಥಿತಿಯನ್ನು ಬಹುಬಾರಿ ಯುವಕರು ಪಡೆದಿರುವ ಕೌಶಲ್ಯ ಹಾಗೂ ಉದ್ಯಮ ಪ್ರಪಂಚವು ಅವರಿಂದ ಏನು ಬಯಸುತ್ತದೆಂಬುದರ ನಡುವೆ ಹೊಂದಾಣಿಕೆಯಿಲ್ಲ ಎಂಬುದಾಗಿ ಬಿಂಬಿಸಲಾಗುತ್ತದೆ. ಈ ಹೇಳಿಕೆಯಲ್ಲಿ ಸತ್ಯಾಂಶವಿದೆ ಎಂಬುದೇನೋ ನಿಜ. ಆದರೆ ಇದು ಅರೆ ಸತ್ಯವಷ್ಟೇ. ವಾಸ್ತವವೆಂದರೆ,ಇಂದು ಉನ್ನತ ಶಿಕ್ಷಣವನ್ನು ಮುಗಿಸಿರುವ ಯುವಕ-ಯುವತಿಯರಿಗೂ ಕೂಡ ಉದ್ಯೋಗ ಸಿಗುತ್ತಿಲ್ಲ. ಒಂದು ವೇಳೆ ಅವರಿಗೆ ಉದ್ಯೋಗಾವಕಾಶ ಸಿಕ್ಕರೆ ಅದು ಅನೌಪಚಾರಿಕ ವಲಯದಲ್ಲಿ ಮಾತ್ರ. ಒಂದು ಅಂದಾಜಿನ ಪ್ರಕಾರ , ಇಂದು ಭಾರತದಲ್ಲಿ ಶೇ. 90ಕ್ಕೂ ಹೆಚ್ಚು ಪ್ರಮಾಣದಲ್ಲಿ ಅನೌಪಚಾರಿಕ ಉದ್ಯೋಗಗಳಿವೆ.

ಇಲ್ಲಿಯವರೆಗೆ ಬಂದಿರುವ ಸರ್ಕಾರಗಳ ಉದ್ಯೋಗ ಸೃಷ್ಟಿಯ ಹೇಳಿಕೆಗಳು ವಾಸ್ತವವಾಗಿ ಯಾವ ಫಲವನ್ನೂ ನೀಡಿಲ್ಲ. ಇಂದಿನ ನಿಜಸ್ಥಿತಿಯೆಂದರೆ ಉದ್ದಿಮೆ ವಲಯದಲ್ಲಿ ಹೆಚ್ಚು ಜನರು ಅಗತ್ಯವಿರುವ (ಶ್ರಮಾಧಾರಿತ) ಉದ್ಯೋಗಗಳಿಗಿಂತ ಯಾಂತ್ರೀಕರಣವು ಹೆಚ್ಚಿರುವ ಕಡಿಮೆ ಜನರ ಅಗತ್ಯವಿರುವ ಉದ್ದಿಮೆಗಳೇ ಹೆಚ್ಚು . ಇಲ್ಲಿ ನಾವು ತೀವ್ರಗತಿಯಲ್ಲಿ ನಿರುದ್ಯೋಗ ಬೆಳವಣಿಗೆಯ (೧) ಅಪಾಯವನ್ನು ಕಾಣುತ್ತಿದ್ದೇವೆ.

ಉದ್ಯೋಗ ಸೃಷ್ಟಿಗೆ ಸಂಬಂಧಿಸಿದಂತೆ ಲಾಭಕೋರ ಬಂಡವಾಳಶಾಹಿ ಉದ್ದಿಮೆದಾರರು ನಿರ್ಲಿಪ್ತರಾಗಿದ್ದಾರೆ. ಅವಕಾಶ ಸಿಕ್ಕರೆ ಅವರು ತಮಗೆ ಗರಿಷ್ಠ ಲಾಭವನ್ನು ಖಚಿತಪಡಿಸುವ, ಸಲೀಸಾಗಿ ಕಾರ್ಯನಿರ್ವಹಿಸಲು ಸಹಕಾರಿಯಾಗುವ ಮಟ್ಟದಲ್ಲಿ ಕನಿಷ್ಠ ಸಂಖ್ಯೆಯ ಉದ್ಯೋಗಿಗಳನ್ನು ನೇಮಿಸಿಕೊಳ್ಳುತ್ತಾರೆ.

ಕ್ಲೀಸ್‌ರವರು (2014) (೨) ಈ ಕುರಿತು ಬಲವಾದ ಒಂದು ವಾದವನ್ನು ಮಂಡಿಸುತ್ತಾರೆ, 'ನಿರುದ್ಯೋಗವೆಂದರೆ ಕಾರ್ಮಿಕರ ಪೂರೈಕೆ ಸಮಸ್ಯೆಯಲ್ಲ, ಇದು ಬಂಡವಾಳಶಾಹಿಯ ರಚನಾತ್ಮಕ ಸಮಸ್ಯೆ.' ಇಂದು ನಮ್ಮ ವಿಶ್ವದಲ್ಲಿ ಎರಡು ಬಿಲಿಯನ್ ಅಥವಾ ಇನ್ನೂ ಹೆಚ್ಚಿನ ಸಂಖ್ಯೆಯಲ್ಲಿ ನಿರುದ್ಯೋಗಿಗಳು ಅಥವಾ ಅರೆಕಾಲಿಕ ಉದ್ಯೋಗಿಗಳಿದ್ದಾರೆ. ಇದಕ್ಕೆ ಕಾರಣ ಅವರು ಸೂಕ್ತವಾದ ಕೌಶಲ್ಯ ಹೊಂದಿಲ್ಲ ಎಂದಲ್ಲ, ಪೂರ್ಣ ಉದ್ಯೋಗ ಒದಗಿಸುವುದು ಬಂಡವಾಳವಾದದ ಲಕ್ಷಣವೂ ಅಲ್ಲ ಗುರಿಯೂ ಅಲ್ಲ.' ಈ ಪರಿಸ್ಥಿತಿಯು ನಿರ್ದಿಷ್ಟವಾಗಿ ಭಾರತದಂತಹ ಪೂರ್ವ ವಸಾಹತು

ದೇಶಗಳಲ್ಲಿ ತೀವ್ರವಾಗಿರುವುದು ನಿಚ್ಚಳವಾಗಿ ಕಾಣುತ್ತದೆ. ಏಕೆಂದರೆ ಇಲ್ಲಿನ ಜನಸಂಖ್ಯಾ ಸ್ವರೂಪ ಮತ್ತು ಆರ್ಥಿಕ ಸನ್ನಿವೇಶಗಳು ಅಭಿವೃದ್ಧಿ ಹೊಂದಿದ ಪಾಶ್ಚಿಮಾತ್ಯ ದೇಶಗಳಿಗಿಂತಲೂ ಬಹಳ ಭಿನ್ನ.

ಸಾಂಪ್ರದಾಯಿಕ ಜೀವನೋಪಾಯ ಮತ್ತು ಜೀವನಾಧಾರದ ಸಾಂಪ್ರದಾಯಿಕ ವಿಧಾನಗಳಿಂದ ಜನರು ದೂರ ಸರಿಯುತ್ತಿರುವುದು ಇಂದಿನ ಒಂದು ವಾಸ್ತವ ಅನುಭವ.

ಆ ಸಮುದಾಯದ ಮುಖಂಡರೊಂದಿಗೆ ಮತ್ತು ಸ್ಥಳೀಯ ಅಡಳಿತಗಾರರ ಜೊತೆ ನನ್ನ ಮಾತುಕತೆಯು ಈ ವಿಶ್ಲೇಷಣೆಯನ್ನು ದೃಢೀಕರಿಸಿತು.

ಸಾಮಾನ್ಯವಾಗಿ ಮಾತನಾಡಿದಾಗ ಅವರು ಉದ್ಯೋಗಕ್ಕೆ ಶಿಕ್ಷಣವು ಅಗತ್ಯ ಎಂಬ ಸಾಮಾನ್ಯ ತಿಳಿವಳಿಕೆಯ ಮಾತನ್ನು ಒತ್ತಿ ಹೇಳಿದರು. ಆದರೆ ನಾನು ಹೆಚ್ಚು ಗಂಭೀರವಾಗಿ ಚರ್ಚೆಯನ್ನು ನಡೆಸಿದಾಗಲೆಲ್ಲಾ ಉದ್ಯೋಗ ಸಿಗುವುದು ತೀರಾ ಕಷ್ಟ, ಬಹುತೇಕ ಅಸಾಧ್ಯವೆನ್ನಬಹುದು, ಶಿಕ್ಷಣವು ಈ ಪ್ರಕ್ರಿಯೆಗೆ ನೆರವು ನೀಡುತ್ತಿಲ್ಲ ಎಂಬುದನ್ನು ಒಪ್ಪುತ್ತಾರೆ. ಈಗಿನ ವಿದ್ಯಾವಂತ ನಿರುದ್ಯೋಗಿಗಳು ಅರೆವಿದ್ಯಾವಂತರಾಗಿದ್ದು, (ಗುಜರಾತಿ: ಅಧ್ಕಾಚ್ರು ಭನೇಲಾ) ಹೊಲಗಳಲ್ಲಿ ಕೆಲಸ ಮಾಡಲು ಅಥವಾ ದೈಹಿಕ ಕೆಲಸಗಳಲ್ಲಿ ತೊಡಗಲು ನಿರಾಕರಿಸುತ್ತಾರೆ. ಕಳ್ಳಭಟ್ಟಿ ಕೆಲಸ ಅಥವಾ ಸ್ಥಳೀಯ ರಾಜಕಾರಣಿಗಳ ಭಂಟರಾಗುವಂತಹ ಚಟುವಟಿಕೆಗಳಿಗೆ ಬೇಗ ಬಲಿಯಾಗುತ್ತಾರೆ ಎಂದು ಸಮುದಾಯದ ಸದಸ್ಯರೊಬ್ಬರು ಹೇಳಿದರು. ಪರಿಸ್ಥಿತಿಯು ಹೀಗಿರುವಾಗ ನಮಗೆ ಶಿಕ್ಷಣ ಮತ್ತು ಉದ್ಯೋಗದ ನಡುವಿನ ಸಂಬಂಧದ ಕುರಿತು ಗಂಭೀರವಾಗಿ ಮರುಮೌಲ್ಯಮಾಪನ ಮಾಡುವ ಅಗತ್ಯವು ಎದುರಾಗುತ್ತದೆ. ಇಲ್ಲಿ ಸ್ಪಷ್ಟವಾಗುವುದೇನೆಂದರೆ, ಉದ್ಯೋಗ ಸೃಷ್ಟಿ ಅಥವಾ ಕೌಶಲ್ಯಗಳನ್ನು ಅಭಿವೃದ್ಧಿಪಡಿಸುವ ಪ್ರಯತ್ನಗಳನ್ನು ನಾವು ಬಿಡಬೇಕೆಂದಲ್ಲ. ಆದರೆ ಈ ಧೋರಣೆಯ ಮೇಲೆ ನಾವು ಸಂಪೂರ್ಣವಾಗಿ ಅವಲಂಬಿಸುವುದು ಮತ್ತು ಅದರ ಮೇಲೆ ಅಂಧ ವಿಶ್ವಾಸ ಹೊಂದಿರುವುದರ ಬಗ್ಗೆ ನಾವು ಆಲೋಚನೆ ಮಾಡಬೇಕಾಗುತ್ತದೆ.

ಇಲ್ಲಿಯವರೆಗೆ 'ಜನಸಂಖ್ಯಾ ಲಾಭ'ವನ್ನು ಬಳಸದೆ ವ್ಯರ್ಥ ಮಾಡುವುದರ ಕುರಿತ ಎಲ್ಲಾ ಚರ್ಚೆಗಳು ಬಂಡವಾಳಶಾಹಿ ಆರ್ಥಿಕತೆಯ ಉದ್ಯೋಗಗಳ ಮೇಲೆ ಕೇಂದ್ರೀಕೃತವಾಗಿದೆ. ಇದು ತಮ್ಮ ಮಗುವಿನ 'ಸಾಮಾಜಿಕ ಸ್ಥಾನಮಾನ'ಕ್ಕಾಗಿ ಶಿಕ್ಷಣ ಒದಗಿಸುವ ಮತ್ತು ಈ ಪ್ರಕ್ರಿಯೆಯಲ್ಲಿ ಆಧುನಿಕ ಜಗತ್ತು ಒದಗಿಸಬಲ್ಲ ಅವಕಾಶಗಳನ್ನು ನಿರಾಕರಿಸಿದಂತಾಗುವ ಪ್ರಸ್ತುತತೆಯ ಕುರಿತಾದ ಹಳೆಯ ಚರ್ಚೆಯ ಪುನರಾವರ್ತನೆಯಲ್ಲ. ಇದು ಯುವಸಮೂಹದ ಆರ್ಥಿಕ ಯೋಗಕ್ಷೇಮವನ್ನು ಖಚಿತಪಡಿಸುವಲ್ಲಿ ಇತರ ಸಾಧ್ಯತೆಗಳನ್ನು ಅನ್ವೇಷಿಸಲು ಒಂದು ಮಾರ್ಗ ಸೂಚಿಯಾಗಿದೆ.
ಹಾಗೆಯೇ ಇಲ್ಲಿಯವರೆಗೆ ಕಾರ್ಯಗತವಾಗಿರುವುದನ್ನು ಕಾಪಾಡುವ ಮತ್ತು ಕಾರ್ಯಗತವಾಗುವ ಪರ್ಯಾಯಗಳು ಇದ್ದಾಗ ಅದನ್ನು ಕೈಬಿಡಬಹುದೆಂಬ ಕರೆಯಾಗಿದೆ. ಆದರೆ ಉದ್ಯೋಗ ಹಾಗೂ ಜೀವನೋಪಾಯಗಳ ಮೇಲೆ ಕೇಂಂದ್ರೀಕರಿಸಬೇಕಾಗಿರುವುದು ಅವಶ್ಯ. ಇದೇನೂ ಹೊಸ ಚರ್ಚಾ ವಿಷಯವಲ್ಲ. ತಮ್ಮ ಗ್ರಾಮಸ್ವರಾಜ್‌ನ ದೃಷ್ಟಿಗೆ ಪೂರಕವಾದ ನಯೀತಾಲೀಮ್ ಅನ್ನು ಪ್ರಸ್ತಾಪಿಸಿದಾಗ ಗಾಂಧೀಜಿಯವರು ಇದನ್ನೇ ಬಯಸಿದ್ದರು. 1950ರಲ್ಲಿ ಈ ಹಳ್ಳಿಯಲ್ಲಿ ಸ್ಥಾಪಿಸಲಾಗಿದ್ದ ಆಶ್ರಮ ಶಾಲೆಯು ಗಾಂಧೀಜಿಯವರ ಈ ದೃಷ್ಟಿಯ ಸಾಕಾರ ರೂಪವಾಗಿತ್ತು. ಆದರೆ ಇದು ಕೌಶಲ್ಯಗಳು ಮತ್ತು ಉದ್ಯೋಗಗಳ ಈಗಿನ ಚರ್ಚೆಗೆ ಬಲಿಯಾಗಿದೆ. ಈಗ ಬೊನಾವೆಂಟುರಾ ಡಿಸೋಜಾ ಸ್ಯಾಂಟೋಸ್‌ರಂತಹ ವಿದ್ವಾಂಸರು ಬಂಡವಾಳಶಾಹಿ ಉತ್ಪಾದನಾ ವಿಧಾನಗಳಿಗೆ ಮೀರಿ ಪರ್ಯಾಯಗಳನ್ನು ಹುಡುಕಲು

ಕೂಡ ಸೂಚಿಸಿದ್ದಾರೆ ಮತ್ತು ಸಹಕಾರಿ ಉತ್ಪಾದನಾ ವಿಧಾನ ಅಥವಾ ಸಹಯೋಗ ಆರ್ಥಿಕತೆ, ಪರ್ಯಾಯ ಅಭಿವೃದ್ಧಿಯನ್ನು ಮತ್ತು ಅಭಿವೃದ್ಧಿಗೆ ಪರ್ಯಾಯಗಳ ಹುಡುಕಾಟವನ್ನು ಪ್ರಸ್ತಾಪಿಸಿದ್ದಾರೆ.ನಮ್ಮ ಶಿಕ್ಷಣ ನೀತಿಯು ಇದರತ್ತ ಗಮನಹರಿಸಬೇಕೆಂದರೆ, ನಾವು ಈಗಿರುವ ವಾಸ್ತವ ಪರಿಸ್ಥಿತಿಯನ್ನು ಒಪ್ಪಬೇಕು ಮತ್ತು ಅವು ನೈಜಸ್ಥಿತಿಗಳಲ್ಲಿ ಹೇಗೆ ಪ್ರಕಟವಾಗುವವೆಂಬ ಸೂಕ್ಷ್ಮತೆಗಳನ್ನು ಅರಿಯಲು ಗಂಭೀರವಾಗಿ ಪ್ರಯತ್ನಿಸಬೇಕು. ಭಿಲ್‌ಪುರ್ ಕೇವಲ ಒಂದು ಹಳ್ಳಿಯಷ್ಟೇ. ಬೇರೆ ಹಳ್ಳಿಗಳಲ್ಲಿ ಬೇರೆ ರೀತಿಯ ಚಲನಶೀಲಾಂಶಗಳು ಕಾರ್ಯಗತವಾಗಿರುತ್ತವೆ. ನಗರದ ಬಡವರಲ್ಲಿ ಇದು ಇನ್ನೂ ಭಿನ್ನವಾಗಿರಬಹುದು. ಆದರೆ ಅವರ ಸಂಕಟವನ್ನು ಅಂಗೀಕರಿಸಿ ಅರ್ಥಮಾಡಿಕೊಳ್ಳಲು ನಾವು ಸಿದ್ಧರಿದ್ದರೆ ಮಾತ್ರ ನಾವು ನಮಗೆ ಪ್ರತಿಕ್ರಿಯಿಸಲು ಸಾಧ್ಯವಾಗುತ್ತದೆ.ವಿಕಾಸ್ ಮನಿಯರ್ ಅವರು ಅಜೀಂ ಪ್ರೇಮ್‌ಜಿ ವಿಶ್ವವಿದ್ಯಾಲಯದ ಸ್ಕೂಲ್ ಆಫ್ ಎಜುಕೇಷನ್ ವಿಭಾಗದಲ್ಲಿ ಪ್ರಾಧ್ಯಾಪಕರಾಗಿದ್ದಾರೆ. ಅವರನ್ನು vikas.maniar@apu.edu.in ಮೂಲಕ ಸಂಪರ್ಕಿಸಬಹುದು.

1. *Some Inputs for Draft National Education Policy, 2016* Section
2. ನಿದರ್ಶನಕ್ಕಾಗಿ 2017ರ ಮಾರ್ಚ್ 15ರಂದು ಹಿಂದೂಸ್ತಾನ್ ಟೈಮ್ಸ್‌ನಲ್ಲಿ ಪ್ರಕಟವಾದ *'India must be careful: Jobless growth can lead to social unrest'. ಲೇಖನವನ್ನು ಗಮನಿಸಿ.*
3. *ಉದ್ಧೃತ- 'Education, Economy and Society' by Salim Vally and Enver Motala.*

*ಅನುವಾದ :ಹೇಮಾದೇವಿ ಬಿ.ಎನ್*
*ಪರಿಶೀಲನೆ : ಚಂದ್ರಶೇಖರ್ ಮಂಡೆಕೋಲು*